WPP-47 / 2009-2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ನವೆಂಬರ್ ೩, ೨೦೧೧ (ಕಾರ್ತಿಕ ೧೨, ಶಕ ವರ್ಷ ೧೯೩೩) | ಸಂಚಿಕೆ ೪೩ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 133 ಸಿಎನ್ಎಸ್ 2008, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್, 2011.**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಮಾಲೂರು** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1. ಶ್ರೀ ರಾಮಯ್ಯ ಬಿನ್ ಬೈರಪ್ಪ, ಪಡವನಹಳ್ಳಿ ಗ್ರಾಮ, ಲಕ್ಕೂರು ಹೋಬಳಿ, ಮಾಲೂರು ತಾಲ್ಲೂಕು
2. ಶ್ರೀಮತಿ ಪಾರ್ವತಮ್ಮ ಬಿನ್ ರಾಮಚಂದ್ರಪ್ಪ, ತೊಳಸನಹಳ್ಳಿ ಗ್ರಾಮ, ಮಾಸ್ತಿ ಹೋಬಳಿ, ಮಾಲೂರು ತಾಲ್ಲೂಕು
3. ಶ್ರೀ ಸಾಕಪ್ಪ ಬಿನ್ ಸಾಕಪ್ಪ, ಬಿಟ್ನಹಳ್ಳಿ ಗ್ರಾಮ, ಮಾಸ್ತಿ ಹೋಬಳಿ, ಮಾಲೂರು ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 1304**

### ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 47 ಸಿಎನ್ಎಸ್ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 157 ಸಿಎನ್ಎಸ್ 2008 ದಿನಾಂಕ: 14–10–2009ರಲ್ಲಿ ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನ ಕರ್ನಾಟಕ ಕೋ–ಆಪ್ ಉಲನ್ ಟೆಕ್ಸ್‌ಟೈಲ್ ಮಿಲ್ ನಿಯಮಿತ, ಕಮದೋಡ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಕರಿಯಪ್ಪ ಮಲ್ಲೇಶಪ್ಪ ಬೀರಾಳ, ಸಾ: ಹಿರೇಬಿದರಿ ಇವರ ನಾಮನಿರ್ದೇಶನವನ್ನು ಮಾರ್ಪಡಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಶ್ರೀ ಕರಿಯಪ್ಪ ಮಲ್ಲೇಶಪ್ಪ ಬೀರಾಳ, ಸಾ: ಹಿರೇಬಿದರಿ** ಇವರನ್ನು **ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನ ಕರ್ನಾಟಕ ಕೋ–ಆಪ್ ಉಲನ್ ಟೆಕ್ಸ್‌ಟೈಲ್ ಮಿಲ್ ನಿಯಮಿತ, ಕಮದೋಡ** ಇದರ ಆಡಳಿತ ಮಂಡಳಿಗೆ ಪುನಃ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 1305**

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 36 ಕಗೃಸೇ 2011, ಬೆಂಗಳೂರು, ದಿನಾಂಕ: 24ನೇ ಮೇ, 2011.**

ಕರ್ನಾಟಕ ಗೃಹರಕ್ಷಕ ಅಧಿನಿಯಮ 1962ರ (ತಿದ್ದುಪಡಿ ನಿಯಮಗಳು 2003) ನಿಯಮ 3ಬಿ ರ ಉಪ ಕಲಂ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಬಿ.ಹೆಚ್. ವೀರಪ್ಪ, ದೈಹಿಕ ಶಿಕ್ಷಕರು ಇವರನ್ನು ದಾವಣಗೆರೆ ಜಿಲ್ಲೆಯ ಗೃಹರಕ್ಷಕ ದಳದ ಗೌರವ ಸಮಾದೇಷ್ಟರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಆರ್. ಶ್ರೀನಿವಾಸರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)

ಒಳಾಡಳಿತ ಇಲಾಖೆ, (ಪೊಲೀಸ್ ಸಹಾಯಕ ಸೇವೆಗಳು)

**ಪಿ.ಆರ್. 1306**

**PERSONNEL AND ADMINISTRATIVE REFORMS SECRETARIAT**

**NOTIFICATION**

**NO. DPAR 202 SPS 2010, Bangalore, Dated: 24th September, 2011**

Shri. K.V. Gagandeep, IPS (KN-86), Additional Director General of Police & Inspector General of Prisons, Bangalore is posted as Additional Director General of Police, Administration, Bangalore in the cadre post for a day in the vacant post. From the next day Shri. K.V. Gagandeep, IPS, is re-posted as Additional Director General of Police & Inspector General of Prisons, Bangalore.

By Order and in the Name of the Governor of Karnataka,

**ASHOK P. ATRE,**

Under Secretary to Government,

DP&AR (Services-IV)

**P.R : 1307**

**PERSONNEL AND ADMINISTRATIVE REFORMS SECRETARIAT**

**NOTIFICATION**

**NO. DPAR 99 SFP 2011, Bangalore, Dated: 23rd September, 2011**

**Shri. Vipin Singh, IFS (KN-98),** Deputy Conservator of Forests & Project Director, Karnataka State Wide Area Network (KSWAN), e-Governance, DPAR, Bangalore is transferred with immediate effect and his services are placed at the disposal of Health & Family Welfare Department for being posted as **Deputy Conservator of Forests & Additional Director of Karnataka State Drug Logistic and Warehousing Society, Bangalore** vice Sri. N. Jayadev, KAS, transferred.

Government declare under rule 11 of IFS (Pay) Rules, 2007, that the post of Deputy Conservator of Forests & Additional Director of Karnataka State Drug Logistic and Warehousing Society, Bangalore, is equivalent in status and responsibilities to the IFS cadre post of Deputy Conservator of Forests (Head Quarters), included in schedule II-B to the said rules.

By Order and in the Name of the Governor of Karnataka,

**A.P. ATRE,**

Under Secretary to Government,

DP&AR (Services-IV)

**P.R : 1308**

**PERSONNEL AND ADMINISTRATIVE REFORMS SECRETARIAT**

**NOTIFICATION**

**NO. DPAR 490 SAS 2011, Bangalore, Dated: 28th September, 2011**

***Smt. K. Ratna Prabha, IAS, (KN 81), waiting for posting*** is posted with immediate effect and until further orders as ***Regional Commissioner, Gulbarga Division, Gulbarga*** vice Dr. Rajneesh Goel, IAS transferred.

By Order and in the Name of the Governor of Karnataka,

**N. Srinivasa Murthy,**

Under Secretary to Government,

DP&AR (Services-I)

**P.R : 1309**

## PERSONNEL AND ADMINISTRATIVE REFORMS SECRETARIAT

### NOTIFICATION

### NO. DPAR 463 SAS 2011, Bangalore, Dated: 28th September, 2011

***Smt. M. Deepa, IAS (KN 2008), Assistant Commissioner, Gadag Sub-Division, Gadag*** is transferred with immediate effect and posted until further orders as ***Director, Rural Infrastructure RD&PR Department, Bangalore*** in the existing vacancy.

By Order and in the Name of the Governor of Karnataka

**N. Srinivasa Murthy,**

Under Secretary to Government,

**P.R : 1310** DP&AR (Services-I)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಆಸುಇ 210 ಸಿಶಾಸೇ 2010, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2011.

2011ನೇ ಸಾಲಿನಲ್ಲಿ 60 ವರ್ಷ ವಯೋಮಿತಿಯು ಪೂರ್ಣಗೊಳ್ಳಲಿರುವ ಕರ್ನಾಟಕ ಸರ್ಕಾರ ಸಚಿವಾಲಯದ ಶಾಖಾಧಿಕಾರಿಯಾದ **ಶ್ರೀಮತಿ ಸಾದಿಕ ಬಾನು, ಯೋಜನೆ ಇಲಾಖೆ** ಇವರ ಜನ್ಮ ದಿನಾಂಕವು 01–11–1951 ಆಗಿದ್ದು, ಇವರು 60 ವರ್ಷ ವಯೋಮಿತಿಯು ಪೂರ್ಣಗೊಂಡು ದಿನಾಂಕ: 31–10–2011ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ನಿವೃತ್ತರಾಗಲಿರುವರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1311** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಆಸುಇ 148 ಎಸ್ಐಎಸ್ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.

ಶ್ರೀ ಅಜಯ್ ಸೇತ್, ಭಾ.ಆ.ಸೇ., ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ) ಬೆಂಗಳೂರು ಇವರು ದಿನಾಂಕ: 09–09–2011ರಂದು ಲಭ್ಯವಿರುವ ನಿರ್ಬಂಧಿತ ರಜೆ ಹಾಗೂ ದಿನಾಂಕ: 10–09–2011 ಮತ್ತು 11–09–2011ರಂದು ಲಭ್ಯವಿರುವ ಸಾರ್ವತ್ರಿಕ ರಜೆಗಳನ್ನು ಹಾಗೂ ದಿನಾಂಕ: 12–09–2011 ಮತ್ತು 13–09–2011ರಂದು ಸಾಂದರ್ಭಿಕ ರಜೆಗಳನ್ನು ಉಪಯೋಗಿಸಿಕೊಂಡು ದಿನಾಂಕ: 09–09–2011 ರಿಂದ 13–09–2011ರ ಅವಧಿಯಲ್ಲಿ ಪ್ರಸಕ್ತ 2010–11ನೇ ಬ್ಲಾಕ್‌ನಲ್ಲಿ ಸ್ವಗ್ರಾಮ ಪ್ರಯಾಣ ರಿಯಾಯಿತಿಯನ್ನು ಸ್ವತಃ ಉಪಯೋಗಿಸಿಕೊಂಡು ತಮ್ಮ ಸ್ವಗ್ರಾಮವಾದ **ಶಹಜ್ಹಾನ್‌ಪುರ್**ಗೆ ಹೋಗಿ ಬರಲು ಅನುಮತಿ ನೀಡಲಾಗಿದೆ ಹಾಗೂ ಅವರ ಈ ಕೆಳಕಂಡ ಕುಟುಂಬದ ಸದಸ್ಯರು ದಿನಾಂಕ: 25–09–2011 ರಿಂದ 09–10–2011ರ ಅವಧಿಯಲ್ಲಿ ಸದರಿ ರಿಯಾಯಿತಿಯನ್ನು ಉಪಯೋಗಿಸಿಕೊಂಡು **ಶಹಜ್ಹಾನ್‌ಪುರ್**ಗೆ ಹೋಗಿ ಬರಲು ಸರ್ಕಾರ ಅನುಮತಿ ನೀಡಿದೆ.

| ಕ್ರಮ ಸಂಖ್ಯೆ | ಹೆಸರು | ಸಂಬಂಧ | ವಯಸ್ಸು |
|---|---|---|---|
| 1 | ಶ್ರೀಮತಿ ಸೋನು ಸೇತ್ | ಪತ್ನಿ | 40 ವರ್ಷ |
| 2 | ಕುಮಾರಿ: ಮಿತಾಲಿ | ಮಗಳು | 14 ವರ್ಷ |

ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: O.M.No.14028/4/2009-Estt.(L), ದಿನಾಂಕ: 03–06–2009 ರನ್ವಯ ಹಾಗೂ ಈ ಸಂಬಂಧ ಕೇಂದ್ರ ಸರ್ಕಾರದ ಸಂಖ್ಯೆ: 11019/24/2005–AIS-III. ದಿನಾಂಕ: 03–11–2009ರ ಪತ್ರದಲ್ಲಿ ನೀಡಿರುವ ಸ್ಪಷ್ಟೀಕರಣದ ಹಿನ್ನೆಲೆಯಲ್ಲಿ ಅಧಿಕಾರಿಯವರಿಗೆ 10 ದಿನಗಳ ಗಳಿಕೆ ರಜೆ ನಗದೀಕರಣ ಸೌಲಭ್ಯ ಪಡೆಯಲು ಸಹ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶ್ರೀನಿವಾಸಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1312** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 83 ಆಸೇವ 2011, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್, 2011.**

ಅಧಿಸೂಚನೆ ಸಂಖ್ಯೆ: DPAR 1 SKG 2010 ದಿನಾಂಕ: 3–3–2011ರಲ್ಲಿ ಪ್ರಕಟಿಸಿರುವ ಕೆ.ಎ.ಎಸ್.ಸಮೂಹ–ಎ (ಆಯ್ಕೆ ಶ್ರೇಣಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಆಧಾರದ ಮೇಲೆ ಈ ಕೆಳಕಂಡ ಕೆ.ಎ.ಎಸ್.ಸಮೂಹ–ಎ (ಆಯ್ಕೆ ಶ್ರೇಣಿ) ಅಧಿಕಾರಿಗಳಿಗೆ, ತಕ್ಷಣದಿಂದ ಜಾರಿಗೆ ಬರುವಂತೆ ₹.26250–36500ರ ವೇತನ ಶ್ರೇಣಿಯ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ವೃಂದಕ್ಕೆ ಸ್ಥಾನಪನ್ನರಾಗಲು ಬಡ್ತಿ ನೀಡಿ, ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸಿ ನೇಮಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ<br>ಶ್ರೀ/ಶ್ರೀಮತಿ | ಬಡ್ತಿ ಮೇಲೆ ನೇಮಿಸಿದ ಹುದ್ದೆ |
|---|---|---|
| 1 | ಉಮೇಶ್ ಕುಸುಗಲ್<br>ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ |
| 2 | ಸಿ. ಕೃಷ್ಣೇಗೌಡ<br>ಜಂಟಿ ಆಯುಕ್ತರು, ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ್ ಫೋರ್ಸ್, ಬಿ.ಬಿ.ಎಂ.ಪಿ., ಬೆಂಗಳೂರು | ಅಪರ ಆಯುಕ್ತರು ಹುದ್ದೆಗೆ ಉನ್ನತೀಕರಿಸಿ ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ್ ಫೋರ್ಸ್, ಬಿ.ಬಿ.ಎಂ.ಪಿ., ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಿದೆ. |
| 3 | ಎಂ. ದೊಡ್ಡಪ್ಪ<br>ಡೆಪ್ಯುಟಿ ಮೆಟ್ರೋಪಾಲಿಟನ್ ಕಮಿಷನರ್, ಬಿ.ಎಂ.ಆರ್.ಡಿ.ಎ., ಬೆಂಗಳೂರು | ಅಪರ ಮೆಟ್ರೋಪಾಲಿಟನ್ ಕಮಿಷನರ್ ಹುದ್ದೆಗೆ ಉನ್ನತೀಕರಿಸಿ ಬಿ.ಎಂ.ಆರ್.ಡಿ.ಎ., ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 4 | ಬಿ.ವಿ. ಕುಲಕರ್ಣಿ<br>ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ | ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 5 | ಕೆ.ಹೆಚ್. ಕಾಕನೂರ್<br>ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 6 | ಎಲ್. ರಬೀಂದ್ರ,<br>ಜಂಟಿ ಆಯುಕ್ತರು,<br>ಬ್ಯಾಟರಾಯನಪುರ ವಲಯ, ಬಿ.ಬಿ.ಎಂ.ಪಿ., ಬೆಂಗಳೂರು. | ಅಪರ ಆಯುಕ್ತರು ಹುದ್ದೆಗೆ ಉನ್ನತೀಕರಿಸಿ ಬ್ಯಾಟರಾಯನಪುರ ವಲಯ, ಬಿ.ಬಿ.ಎಂ.ಪಿ., ಬೆಂಗಳೂರು. ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 7 | ವಿ.ಜಿ. ದಿವಾಕರ್,<br>ಸರ್ಕಾರದ ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ.(ರಾಜ್ಯ ಶಿಷ್ಟಾಚಾರ), ಬೆಂಗಳೂರು | ಅಪರ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರ ಕಛೇರಿ, ಬೆಂಗಳೂರು. |
| 8 | ಜೆ.ಹೆಚ್. ಕಾಂತಾ<br>ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬೆಳಗಾಂ ಜಿಲ್ಲೆ. | ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬೆಳಗಾಂ ಜಿಲ್ಲೆ. (ಉನ್ನತೀಕರಿಸಿದ ಹುದ್ದೆ) ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 9 | ಕೆ.ವಿ. ನಂಜುಂಡೇಗೌಡ,<br>ವ್ಯವಸ್ಥಾಪಕ ನಿರ್ದೇಶಕರು, ಡಿ.ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್, ಬೆಂಗಳೂರು. | ವ್ಯವಸ್ಥಾಪಕ ನಿರ್ದೇಶಕರು, ಡಿ.ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್, ಬೆಂಗಳೂರು. ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 10 | ಹೆಚ್.ವಿ. ಆತ್ಮರಾಮಯ್ಯ,<br>ಮುಖ್ಯ ಆಡಳಿತಾಧಿಕಾರಿ, ಕಿದ್ವಾಯಿ ಸ್ಮಾರಕ ಮತ್ತು ಗ್ರಂಥಿ ಸಂಸ್ಥೆ, ಬೆಂಗಳೂರು. | ಮುಖ್ಯ ಆಡಳಿತಾಧಿಕಾರಿ, ಕಿದ್ವಾಯಿ ಸ್ಮಾರಕ ಮತ್ತು ಗ್ರಂಥಿ ಸಂಸ್ಥೆ, ಬೆಂಗಳೂರು. ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 11 | ಎನ್. ರಾಜಾರಾಂ,<br>ಪರಿಷತ್ ಕಾರ್ಯದರ್ಶಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. | ಕಾರ್ಯದರ್ಶಿ, ಕರ್ನಾಟಕ ಮಾಹಿತಿ ಆಯೋಗ, ಬೆಂಗಳೂರು– ಶ್ರೀ.ಬಿ.ಎ.ನಾಗೇಶ್, ಇವರ ಸ್ಥಾನದಲ್ಲಿ. |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ ಶ್ರೀ/ಶ್ರೀಮತಿ | ಬಡ್ತಿ ಮೇಲೆ ನೇಮಿಸಿದ ಹುದ್ದೆ |
|---|---|---|
| 12 | ಎ.ಬಿ. ಇಬ್ರಾಹಿಂ, ಮುಖ್ಯ ಆಡಳಿತಾಧಿಕಾರಿ, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು. | ಅಪರ ಆಯುಕ್ತರು (ಆಡಳಿತ ಮತ್ತು ಅಭಿವೃದ್ಧಿ), ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು– ಖಾಲಿ ಹುದ್ದೆ. |
| 13 | ಶಿವಯೋಗಿ ಸಿ.ಕಳಸದ್, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು, ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 14 | ಮೊಹಮ್ಮದ್ ಸಲಾವುದ್ದೀನ್ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1313** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 159 ಆಸೇವ 2011, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2011.**

**ಶ್ರೀ ಜಿ.ಎಂ. ಗಂಗಾಧರ ಸ್ವಾಮಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ,** ಉಪ ವಿಭಾಗಾಧಿಕಾರಿ, ಬೆಂಗಳೂರು ಉತ್ತರ ಉಪವಿಭಾಗ, ಬೆಂಗಳೂರು ಇವರಿಗೆ ಅಧಿಸೂಚನೆ ಸಂಖ್ಯೆ : ಸಿಆಸುಇ 83 ಆಸೇವ 2011 (III) ದಿನಾಂಕ: 17–09–2011 ರಲ್ಲಿ ಕೆ.ಎ.ಎಸ್. (ಹಿರಿಯ ಶ್ರೇಣಿ) ವೃಂದಕ್ಕೆ ಬಡ್ತಿ ನೀಡಿ ವಿಶೇಷ ಜಿಲ್ಲಾಧಿಕಾರಿ (ಕಂದಾಯ), ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಹುದ್ದೆಗೆ ನೇಮಿಸಿರುವುದನ್ನು ಮಾರ್ಪಡಿಸಿ, ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಜನರಲ್ ಮ್ಯಾನೇಜರ್ (Programme Implementation), ರಾಜೀವ್ ಗಾಂಧಿ ರೂರಲ್ ಹೌಸಿಂಗ್ ಕಾರ್ಪೋರೇಷನ್, ಬೆಂಗಳೂರು – ಖಾಲಿ ಹುದ್ದೆಗೆ ನೇಮಿಸಿದೆ.

**ಶ್ರೀ ಜಿ.ಎಸ್. ನಾಯಕ್, ಕೆ.ಎ.ಎಸ್.(ಹಿರಿಯ ಶ್ರೇಣಿ)ಅಧಿಕಾರಿ,** ವಿಶೇಷ ಜಿಲ್ಲಾಧಿಕಾರಿ (ಕಂದಾಯ), ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಇವರನ್ನು ಅಧಿಸೂಚನೆ ಸಂಖ್ಯೆ : ಸಿಆಸುಇ 83 ಆಸೇವ 2011 (IV) ದಿನಾಂಕ: 17–09–2011 ರಲ್ಲಿ ವರ್ಗಾಯಿಸಿ ಜನರಲ್ ಮ್ಯಾನೇಜರ್ (Programme Implementation), ರಾಜೀವ್ ಗಾಂಧಿ ರೂರಲ್ ಹೌಸಿಂಗ್ ಕಾರ್ಪೋರೇಷನ್, ಬೆಂಗಳೂರು – ಖಾಲಿ ಹುದ್ದೆಗೆ ನೇಮಿಸಿರುವುದನ್ನು ರದ್ದುಪಡಿಸಿ ವಿಶೇಷ ಜಿಲ್ಲಾಧಿಕಾರಿ (ಕಂದಾಯ), ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಹುದ್ದೆಯಲ್ಲಿಯೇ ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮುಂದುವರೆಸಿ ಆದೇಶಿಸಿದೆ.

**ಶ್ರೀ ಗೋವಿಂದರಾಜ್,** ಉಪಕಾರ್ಯದರ್ಶಿ (ಆಯ್ಕೆ ಶ್ರೇಣಿ) ಅಧಿಕಾರಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ನೇಮಕಾತಿ ನಿರೀಕ್ಷಣೆಯಲ್ಲಿ), ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಯಾದಗಿರಿ ಜಿಲ್ಲೆ, ಯಾದಗಿರಿ–ಖಾಲಿ ಹುದ್ದೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1315** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 285 ಆಸೇಇ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

ಶ್ರೀ ಕೆ. ಪ್ರಭುದೇವ್, ಕೆ.ಎ.ಎಸ್. ಹಿರಿಯ ಶ್ರೇಣಿ ಅಧಿಕಾರಿ, ಪ್ರಸ್ತುತ ವಿಶೇಷ ಭೂಸ್ವಾಧೀನಾಧಿಕಾರಿ, ಮಲಪ್ರಭಾ ಯೋಜನೆ–3, ಧಾರವಾಡ, ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285(1)(ಎ)ರಡಿ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1316**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 285 ಆಸೇಇ 2011 (1), ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

ಅಧಿಸೂಚನೆ ಸಂಖ್ಯೆ: ಸಿಆಸುಇ 285 ಆಸೇಇ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011ರಲ್ಲಿ ಶ್ರೀ ಕೆ. ಪ್ರಭುದೇವ್, ಕೆ.ಎ.ಎಸ್. ಹಿರಿಯ ಶ್ರೇಣಿ ಅಧಿಕಾರಿ, ವಿಶೇಷ ಭೂಸ್ವಾಧೀನಾಧಿಕಾರಿ, ಮಲಪ್ರಭಾ ಯೋಜನೆ–3, ಧಾರವಾಡ, ಇವರಿಗೆ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿರುವುದರಿಂದ ತೆರವಾದ ಸದರಿ ಹುದ್ದೆಗೆ ಉಪವಿಭಾಗಾಧಿಕಾರಿ, ಧಾರವಾಡ ಉಪವಿಭಾಗ, ಧಾರವಾಡ ಇವರನ್ನು ಹೆಚ್ಚುವರಿ ಪ್ರಭಾರದಲ್ಲಿರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1317**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 182 ಆಸೇಇ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

**ಶ್ರೀ ಬಿ.ಎ. ನಾಗೇಶ್,** ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ಅಧಿಕಾರಿ, ಮುಖ್ಯ ಸಂಪಾದಕರು, ಕರ್ನಾಟಕ ಗೆಜೆಟಿಯರ್, ಬೆಂಗಳೂರು ಹುದ್ದೆಗೆ ವರ್ಗಾವಣೆ ಆದೇಶದಲ್ಲಿರುವ (ಪ್ರಸ್ತುತ ರಜೆಯಲ್ಲಿರುವ) ಇವರಿಗೆ ದಿನಾಂಕ : 31–10–2011 ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285(1)(ಎ) ರಡಿ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1318**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 81 ಎಸ್ಎಫ್ಎಸ್ 2011, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2011.**

**ಶ್ರೀ ಎನ್.ಎಲ್. ಶಾಂತಕುಮಾರ್, ಐಎಫ್ಎಸ್** (ಕೆಎನ್–93), ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಕಾರ್ಯದರ್ಶಿ, ಬಯಲುಸೀಮೆ ಅಭಿವೃದ್ಧಿ ಮಂಡಳಿ, ಚಿತ್ರದುರ್ಗ ಇವರು ಯಾಲೆ ವಿಶ್ವವಿದ್ಯಾನಿಲಯ, ಯುನೈಟೆಡ್ ಸ್ಟೇಟ್ಸ್ ಆಫ್ ಅಮೆರಿಕ (ಯುಎಸ್ಎ) ದಲ್ಲಿ 4ನೇ ಹಂತದ ಮಿಡ್ ಕರೀರ್ ತರಬೇತಿಯನ್ನು ಪೂರೈಸಿದ ನಂತರ, ಇವರಿಗೆ ದಿನಾಂಕ : 09–10–2011 ಮತ್ತು 10–10–2011 ರವರೆಗೆ ಒಟ್ಟು 02 (ಎರಡು) ದಿನಗಳ ಎಕ್ಸ್–ಇಂಡಿಯಾ ಗಳಿಕೆ ರಜೆಯನ್ನು (Ex-India Earned Leave) ವೈಯಕ್ತಿಕ ಕಾರಣಗಳ ಹಿನ್ನೆಲೆಯಲ್ಲಿ ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಪಿ. ಅತ್ರೆ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–4)

**ಪಿ.ಆರ್. 1319**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 81 ಎಸ್‌ಎಫ್‌ಎಸ್ 2011, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2011.**

**ಶ್ರೀ ಅಶೋಕ್ ಬಿ. ಬಾಸರಕೋಡ್, ಐಎಫ್‌ಎಸ್** (ಕೆಎನ್–95), ಅರಣ್ಯ ಸಂರಕ್ಷಣಾಧಿಕಾರಿ, ಬಳ್ಳಾರಿ ವೃತ್ತ, ಬಳ್ಳಾರಿ ಇವರು ಯಾಲೆ ವಿಶ್ವವಿದ್ಯಾನಿಲಯ, ಯುನೈಟೆಡ್ ಸ್ಟೇಟ್ಸ್ ಆಫ್ ಅಮೆರಿಕ (ಯುಎಸ್‌ಎ) ದಲ್ಲಿ 4ನೇ ಹಂತದ ಮಿಡ್ ಕರೀರ್ ತರಬೇತಿಯನ್ನು ಪೂರೈಸಿದ ನಂತರ, ಇವರಿಗೆ ದಿನಾಂಕ : 09–10–2011 ಮತ್ತು 10–10–2011 ರವರೆಗೆ ಒಟ್ಟು 02 (ಎರಡು) ದಿನಗಳ ಎಕ್ಸ್–ಇಂಡಿಯಾ ಗಳಿಕೆ ರಜೆಯನ್ನು (Ex-India Earned Leave) ವೈಯಕ್ತಿಕ ಕಾರಣಗಳ ಹಿನ್ನೆಲೆಯಲ್ಲಿ ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಪಿ. ಅತ್ರೆ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–4)

**ಪಿ.ಆರ್. 1320**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 81 ಎಸ್‌ಎಫ್‌ಎಸ್ 2011, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2011.**

**ಶ್ರೀ ಎಸ್. ಮುತ್ತಯ್ಯ, ಐಎಫ್‌ಎಸ್** (ಕೆಎನ್–95), ಅರಣ್ಯ ಸಂರಕ್ಷಣಾಧಿಕಾರಿ, ಧಾರವಾಡ ವೃತ್ತ (ಸಂಶೋಧನೆ), ಧಾರವಾಡ ಇವರು ಯಾಲೆ ವಿಶ್ವವಿದ್ಯಾನಿಲಯ, ಯುನೈಟೆಡ್ ಸ್ಟೇಟ್ಸ್ ಆಫ್ ಅಮೆರಿಕ (ಯುಎಸ್‌ಎ) ದಲ್ಲಿ 4ನೇ ಹಂತದ ಮಿಡ್ ಕರೀರ್ ತರಬೇತಿಯನ್ನು ಪೂರೈಸಿದ ನಂತರ, ಇವರಿಗೆ ದಿನಾಂಕ : 09–10–2011 ಮತ್ತು 10–10–2011 ರವರೆಗೆ ಒಟ್ಟು 02 (ಎರಡು) ದಿನಗಳ ಎಕ್ಸ್–ಇಂಡಿಯಾ ಗಳಿಕೆ ರಜೆಯನ್ನು (Ex-India Earned Leave) ವೈಯಕ್ತಿಕ ಕಾರಣಗಳ ಹಿನ್ನೆಲೆಯಲ್ಲಿ ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಪಿ. ಅತ್ರೆ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–4)

**ಪಿ.ಆರ್. 1321**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 254 ಸಿಶಾಸೇ 2011, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2011.**

**ಶ್ರೀ ಎಲ್. ಶ್ಯಾಮಸುಂದರ್, ನಿವೃತ್ತ ಜೂನಿಯರ್ ಪ್ರೋಗ್ರಾಮರ್, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ,** ಇವರನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ–1) ಶಾಖೆಗೆ ದಿನಾಂಕ : 01–06–2011 ರಿಂದ ಆಗಸ್ಟ್ 2012ರ ಅಂತ್ಯದವರೆಗೆ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15 (1)(b)(ii) ರನ್ವಯ ನೇಮಕ ಮಾಡಲಾಗಿದೆ.

ಇವರ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ)

**ಪಿ.ಆರ್. 1322**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 450 ಸಅಸೇ 2011, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್, 2011.**

ಶ್ರೀ ಎಂ.ಎಸ್. ಮಹಂತೇಶಯ್ಯ, ಸರ್ಕಾರದ ಉಪ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಪ್ರಾಂಶುಪಾಲರು/ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ದಾವಣಗೆರೆ – ಈ ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಪಿ.ಆರ್. 1323**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 407 ಸಅಸೇ 2011, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2011.**

ಅಧಿಸೂಚನೆ ಸಂಖ್ಯೆ ಸಿಆಸುಇ 224 ಸಅಸೇ 2011, ದಿನಾಂಕ 30–06–2011ರಲ್ಲಿ ಶ್ರೀ ಕೆ. ನಾಗೇಶ್, ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ (ಕಾನೂನು ಕೋಶ) ಇವರಿಗೆ ಮುಂಬಡ್ತಿ ನೀಡಿ ಉಪಕಾರ್ಯದರ್ಶಿ, ಕಂದಾಯ ಇಲಾಖೆ ಇಲ್ಲಿ ಶ್ರೀಮತಿ ಗೀತಾ ರಮೇಶ್ ಇವರ ಮುಂಬಡ್ತಿಯಿಂದ ತೆರವಾದ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದ್ದ ಆದೇಶವನ್ನು ಮಾರ್ಪಡಿಸಿ ಶ್ರೀ ಸಿದ್ಧಲಿಂಗಯ್ಯ, ಉಪಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಉಪಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ, ಪುನರ್ವಸತಿ ಮತ್ತು ಭೂದಾಖಲೆಗಳು) ಇಲ್ಲಿ ಖಾಲಿ ಇರುವ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಪಿ.ಆರ್. 1324**

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 351 ಪಿಪಿಇ 2011, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2011.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 351 ಪಿಪಿಇ 2011, ದಿನಾಂಕ : 08–08–2011ರ ಮೂರು ಮತ್ತು ನಾಲ್ಕನೇ ಸಾಲುಗಳಲ್ಲಿ ನಮೂದಿಸಿರುವ "ಬೀದರ್ ಜಿಲ್ಲೆಯ ಭಾಲ್ಕಿ ತ್ವರಿತ ವಿಲೇವಾರಿ ನ್ಯಾಯಾಲಯಕ್ಕೆ" ಎಂಬುದರ ಬದಲಾಗಿ "ಬೀದರ್‌ನ 2ನೇ ತ್ವರಿತ ವಿಲೇವಾರಿ ನ್ಯಾಯಾಲಯಕ್ಕೆ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ನಿಂಗಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–'ಬಿ')

**ಪಿ.ಆರ್. 1325**